# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರ.ಸಂ. : 853

ಸದಸ್ಯರ ಹೆಸರು : ಶ್ರೀ ಆರ್.ಪ್ರಸನ್ನ ಕುಮಾರ್
(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 11-03-2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 3ರ ಅನ್ವಯ ಗ್ರಾಮಗಳಲ್ಲಿರುವ ಸರ್ಕಾರಿ ಜಮೀನುಗಳ "ಭೂ ಲಭ್ಯತಾ ಪಟ್ಟಿ"ಗಳನ್ನು ಗ್ರಾಮ ಪಂಚಾಯಿತಿ ಕಾರ್ಯಾಲಯದ ಫಲಕದಲ್ಲಿ ಪ್ರಕಟಿಸಲಾಗಿದೆಯೇ; (ವಿವರ ನೀಡುವುದು) | ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 3ರ ಮೇರೆಗೆ ರಾಜ್ಯದ ಯಾವುದೇ ಗ್ರಾಮದಲ್ಲಿ ವಿಲೆಗೆ ದೊರೆಯಬಹುದಾದ ಭೂಮಿಗಳನ್ನು ನಿರ್ಧರಿಸುವುದಕ್ಕಾಗಿ ಆಯಾ ತಹಸೀಲ್ದಾರರುಗಳು ಸರ್ಕಾರಿ ಜಮೀನುಗಳ ಭೂ ಪಟ್ಟಿಗಳನ್ನು ತಯಾರಿಸಿ ಪ್ರಕಟಿಸಲು ಅವಕಾಶವಿರುತ್ತದೆ.<br><br>ಈ ನಿಯಮಗಳಡಿಯಲ್ಲಿ ತಾಲ್ಲೂಕಿನ ಎಲ್ಲಾ ಗ್ರಾಮಗಳಲ್ಲಿ ವಿಲೆಗೆ ಲಭ್ಯವಿರುವ ಜಮೀನುಗಳ ಪಟ್ಟಿಯನ್ನು ತಾಲ್ಲೂಕು ಕಛೇರಿಗಳಲ್ಲಿ ಪ್ರಕಟಿಸುವುದಲ್ಲದೇ, ಸಂಬಂಧಿಸಿದ ಗ್ರಾಮ ಪಂಚಾಯಿತಿ ಕಛೇರಿಯಲ್ಲಿ/ಗ್ರಾಮದ ಚಾವಡಿಗಳಲ್ಲಿ ಪ್ರತಿ ವರ್ಷವು ಪರಿಷ್ಕರಿಸಿ ಜುಲೈ 01ನೇ ತಾರೀಖಿನೊಳಗಾಗಿ ಭೂಲಭ್ಯತಾ ಪಟ್ಟಿಯನ್ನು ಪ್ರಕಟಿಸುವಂತೆ ಸುತ್ತೋಲೆ ಸಂಖ್ಯೆ: ಆರ್ ಡಿ 04 ಎಲ್ ಜಿಪಿ 2010, ದಿನಾಂಕ: 31/01/2010ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.<br><br>ಆ ಪ್ರಕಾರ ಬಹುತೇಕ ಜಿಲ್ಲೆಗಳಲ್ಲಿ ಈ ಬಗ್ಗೆ ಕ್ರಮವಹಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದ ಹಿನ್ನೆಲೆಯಲ್ಲಿ ಸರ್ಕಾರವು ಸಂಖ್ಯೆ: ಆರ್ ಡಿ 53 ಎಲ್ ಜಿಪಿ 2016, ದಿನಾಂಕ:07/12/2016ರ ಸುತ್ತೋಲೆಯಲ್ಲಿನ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸುವಂತೆ ಸೂಚನೆ ನೀಡಿದೆ.<br><br>ಆ ಪ್ರಕಾರ 2019-20ನೇ ಸಾಲಿಗೆ ಗ್ರಾಮಗಳಲ್ಲಿ ವಿಲೇವಾರಿಗಾಗಿ ಲಭ್ಯವಿರುವ ಭೂಮಿಯ ಪಟ್ಟಿಯನ್ನು ತಹಶೀಲ್ದಾರರುಗಳು ಪ್ರಕಟಿಸಲು ಕ್ರಮವಹಿಸುತ್ತಿದ್ದಾರೆ. |
| ಆ) | ಈ ಬಗ್ಗೆ ಸರ್ಕಾರ ಆದೇಶ ಹೊರಡಿಸಿದ್ದರೂ ಸಹ ಪಾಲಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದರ ಬಗ್ಗೆ ಕೈಗೊಂಡಿರುವ ಕ್ರಮಗಳ ಮಾಹಿತಿ ಒದಗಿಸುವುದು? | |

ಸಂಖ್ಯೆ: ಆರ್ ಡಿ 32 ಎಲ್ ಜಿಕ್ಯೂ 2020

(ಆರ್. ಅಶೋಕ)
ಕಂದಾಯ ಸಚಿವರು